ಡಾ॥ ರು. ಮ. ಷಡಕ್ಷರಯ್ಯ

# ತೋಂಟದ ಸಿದ್ಧಲಿಂಗಯತಿಯ ಶಿಲ್ಪಶೋಧನೆ

ಬಿಜಾಪುರ ಜಿಲ್ಲೆಯ ಮುದ್ದೇಬಿಹಾಳ ಮತ್ತು ಸಿಂದಗಿ ತಾಲೂಕುಗಳ ಕೆಲಗ್ರಾಮಗಳ ಅನ್ವೇಷಣೆಯನ್ನು ೧೯೮೮–೮೯ರಲ್ಲಿ ಕನ್ನಡ ಸಂಶೋಧನ ಸಂಸ್ಥೆಯ ವತಿಯಿಂದ ಕೈಕೊಂಡು ಹಲವಾರು ಪ್ರಾಚೀನ-ಮಧ್ಯಕಾಲೀನ ಜನವಸತಿಯ ನೆಲೆ, ದೇವಾಲಯ, ಶಿಲ್ಪ, ಶಾಸನ, ಇತ್ಯಾದಿಗಳನ್ನು ಹುಡುಕಲಾಯಿತು. ಕ್ರಿ. ಶ, ಸು. ೨–೧೫ನೆಯ ಶತಮಾನದ ನೆಲೆಗಳು ಈ ಜಿಲ್ಲೆಯ ಸರೂರ, ಗುಂಡಕರ್ಜಗಿ, ಬಸರಕೋಡು (ಮುದ್ದೇಬಿಹಾಳ ತಾಲೂಕು), ಸಿಂದಗಿ ಮತ್ತು ಚಾನುಕೋಟಿ(ಸಿಂದಗಿ ತಾಲೂಕು)ಗಳಲ್ಲಿ, ಕ್ರಿ. ಶ. ಸು. ೧೧–೧೩ನೆಯ ಶತಮಾನದ ಶೈವ ದೇವಾಲಯಗಳು ಸರೂರಲ್ಲಿ ಒಂದು, ಬಸರಕೋಡದಲ್ಲಿ ಮೂರು, ಚಾನುಕೋಟಿಯಲ್ಲಿ ಒಂದು ಮತ್ತು ಈ ಕಾಲದ ಗಣೇಶ, ಶಿವಲಿಂಗ, ನಂದಿ, ಉಮಾ-ಮಹೇಶ್ವರ, ವಿಷ್ಣು, ಬ್ರಹ್ಮ, ಗಣೇಶ, ಭೈರವ, ಮಹಿಷಾಸುರ ಮರ್ದಿನಿ, ಸೂರ್ಯ, ಪಾರ್ಶ್ವನಾಥ, ಜೈನ ಚತುಷ್ಕೂಟ, ಜೈನಯಕ್ಷಿಣಿ ಅಂಬಿಕ, ಶೈವಯತಿಗಳು, ಉಪಾಸಕರು. ಭಕ್ತರು, ಪೌರಾಣಿಕ ಕಥೆಯ ನಿರೂಪಣೆಯುಳ್ಳ ಶಿಲ್ಪ, ಇತ್ಯಾದಿ ಅಲ್ಲಿ ಕಂಡುಬಂದಿವೆ. ಬಸರಕೋಡಿನ ತ್ರಿಕೂಟ ಬಹುಶಃ ತ್ರೈಪುರುಷ ದೇವಾಲಯ. ಅದರಲ್ಲಿ ಒಂದು ಗರ್ಭಗೃಹದಲ್ಲಿಯ ಸುಂದರ ಸೂರ್ಯನ ಪೀಠ-ಮಂಟಪ, ಚಾನುಕೋಟಿಯ ದೇವಾಲಯದ ಹೊರಗೋಡೆಯಲ್ಲಿ ತೋರಿಸಿದ ಸುಂದರ ವಿವಿಧ ಚಿತ್ರಗಳು, ಗುಂಡಕರ್ಜಗಿಯ ಜೈನ ಚತುಷ್ಕೂಟದಲ್ಲಿ ನಾಲ್ಕುಮಂದಿ ತೀರ್ಥಂಕರರ ಸಂಗಡ ಯಕ್ಷ-ಯಕ್ಷಿಣಿಯರ ಹೆಸರುಳ್ಳ ಶಾಸನ, ಸರೂರಿನ ಮುನಿ–ಭಕ್ತರ ಶಿಲ್ಪ, ಸಿಂದಗಿಯ ಮುನಿ, ಯತಿ, ಭಕ್ತ, ಉಪಾಸಕ, ಉಪಾಸಕಿ, ಇತ್ಯಾದಿಯಲ್ಲದೆ ತೋಂಟದ ಸಿದ್ಧಲಿಂಗಯತಿವರ್ಯರ ಶಿಲ್ಪ, ಹಸುವಿನ ನಾಲ್ಕು ಕಾಲುಗಳ ಮುದ್ರೆಯುಳ್ಳ ತೊಟ್ಟಿ ಮತ್ತು ನಂದಿಯ ಕೊರಳ ಮುಂದೆ ಕಂಠಹಾರದ ಬದಲಿಗೆ ಯೋಗಮುದ್ರೆಯಲ್ಲಿ ಕುಳಿತ ಯೋಗಿ, ಇತ್ಯಾದಿ ಬಹು ಮುಖ್ಯವಾಗಿವೆ. ಸಿಂದಗಿ ಮತ್ತು ಸರೂರಿನಲ್ಲಿರುವ ಯತಿ, ಯೋಗಿ, ಉಪಾಸಕ, ಉಪಾಸಕಿ ಗುಂಪಿಗೆ ಸೇರಿದ ಶಿಲ್ಪಗಳ ಶೈಲಿ–ಭಂಗಿ–ಕಾಲಮಾನ ಮೂರರಲ್ಲೂ ವ್ಯತ್ಯಾಸವಿದ್ದರೂ ಕಟ್ಟಿದ ರುದ್ರಾಕ್ಷಿಹಾರದಿಂದ ಅವರು ಶೈವರೆಂದೂ ಅವುಗಳು ಶೈವರ ಮುನಿ-ಭಕ್ತರ ಕೇಂದ್ರಗಳಾಗಿದ್ದವೆಂದೂ ತಿಳಿಯುವುದು. ಈ ಹಿಂದೆ ಸಿಂದಗಿಯ ಶಿಲ್ಪಗಳು ಪ್ರಥಮಬಾರಿಗೆ ಕನ್ನಡ ಸಂಶೋಧನ ಸಂಸ್ಥೆಯ ಪ್ರಾಗ್ರೆಸ್ ರಿಪೋರ್ಟ್ಸ್, ೧೯೫೩–೫೭, ಪುಟ ೧೫ರಲ್ಲಿ ವರದಿಯಾಗಿದ್ದವು. ಅವುಗಳ ಅಂಗವಿನ್ಯಾಸ, ಕಾಲಮಾನ, ವಸ್ತ್ರಾಭರಣ ಮೊದಲಾದುವನ್ನು ಡಾ॥ ಅ. ಸುಂದರ ಅವರು ಅಧ್ಯಯನಮಾಡಿ ೧೯೭೩ರಲ್ಲಿ 'ಸಿಂದಗಿಯ ಪ್ರಾಚೀನ ಶಿಲಾಮೂರ್ತಿಗಳು' ಎಂಬ ಲೇಖನ ಬರೆದು ಕರ್ನಾಟಕ ವಿಶ್ವವಿದ್ಯಾಲಯದ 'ಕರ್ನಾಟಕ ಭಾರತಿ'(ಸಂಪುಟ ೬. ಸಂಚಿಕೆ ೨. ಪು.೧೧೫-೧೨೮)ಯಲ್ಲಿ ಪ್ರಕಟ ಮಾಡಿದ್ದರು. ನಾನು ಈ ಭಾಗದಲ್ಲಿ ಅನ್ವೇಷಣೆ ಕೈಕೊಂಡಾಗ ಸಿಂದಗಿಯ ಸಂಗಮೇಶ್ವರ ದೇವಾಲಯದ ಹೊರಗೆ ಅಪ್ರಕಟಿತ ಮೂರು ಮಹತ್ವದ ಶಿಲ್ಪಗಳು ಕಂಡುಬಂದವು. ಅದರಲ್ಲಿ ತೋಂಟದ ಸಿದ್ಧಲಿಂಗಯತಿಯ ಉಬ್ಬುಶಿಲ್ಪ ಒಂದು ಬೃಹತ್‌ಪೀಠದಲ್ಲಿ ಪ್ರಥಮವಾಗಿ ಕಂಡುಬಂದಿತು (ಚಿತ್ರ–೧). ಅದರ ಅಧ್ಯಯನವನ್ನು ಇಲ್ಲಿ ಕೈಕೊಳ್ಳಲಾಗಿದೆ.

**ಶಿಲ್ಪ :** ಒಂದು ಬೃಹತ್‌ಪೀಠಕ್ಕೆ ಜಲಧಾರಿ ಮತ್ತು ಮಧ್ಯಮೂರ್ತಿಯನ್ನು ಕೂಡಿಸಲು ಮಾಡಿದ ಒಂದು ರಂಧ್ರ ಮೇಲ್ಭಾಗದಲ್ಲಿದೆ. ಮುಂದಿನ ಚೌರಸ ಮೈಯಲ್ಲಿ ಕೆಲವು ಚಿತ್ರಗಳಿವೆ. ಆದರೆ ರಂಧ್ರದಲ್ಲಿ ಕೂಡಿಸಿದ್ದ ಶಿಲ್ಪ ಈಗ ಇರುವುದಿಲ್ಲ. ಅದರ ಚೌರಸ ದಲ್ಲಿರುವ ಚಿತ್ರಗಳಿಗೆ ಪೌರಾಣಿಕ ಐತಿಹ್ಯವಿದ್ದಂತೆ ಕಾಣು ತ್ತದೆ. ಸುತ್ತಲೂ ಪಟ್ಟಿಕೆಯಿದ್ದು, ಕೆಳಗಡೆ ಸ್ವಲ್ಪ ಭಾಗದವರೆಗೆ ನಯಮಾಡಲಾಗಿದೆ. ಉಳಿದ ಕೆಳಗಿನ ಭಾಗ ಹೆಚ್ಚು ಒರಟಾಗಿರುವುದು. ಆ ಪೀಠವನ್ನು ಕೂಡಿಸಿದಾಗ ಒರಟಾದ ಭಾಗ ಮಾತ್ರ ನೆಲದಲ್ಲಿ ಮುಚ್ಚಿಹೋಗುವುದ ರಿಂದ ಅದನ್ನು ಅಷ್ಟೊಂದು ನಯ ಮಾಡದಿರುವುದು ಗೊತ್ತಾಗುತ್ತದೆ.

**ಚಿತ್ರಗಳು: ಯತಿ–ಹಸು :** ಚಿತ್ರಫಲಕದಲ್ಲಿ ಒಬ್ಬ ಯೋಗಿಯು ಒಂದು ಹಸುವಿನ ನಾಲ್ಕು ಕಾಲುಗಳ ಕೆಳಗಡೆ ಯೋಗಮುದ್ರೆಯಲ್ಲಿ ಕುಳಿತಿರುವನು. ಕೈಗಳು ಯೋಗಮುದ್ರೆಯಲ್ಲಿವೆ. ರುದ್ರಾಕ್ಷಿ ಸರಗಳನ್ನು ತಲೆಗೆ, ಕೊರಳಿಗೆ(೨), ತೋಳುಗಳಿಗೆ ಮತ್ತು ಕಾಲುಗಳಿಗೆ ಕಟ್ಟ ಲಾಗಿದೆ. ತಲೆಗೆ ಜಟಾಮುಕುಟವಿದ್ದು ಓಲೆಗಳನ್ನು ಕಿವಿಗಳಲ್ಲಿ ಧರಿಸಲಾಗಿದೆ. ನಿಂತ ಹಸುವಿನ ಚಪ್ಪೆಭಾಗ ಅದರ ಬದಿಯ ಒಬ್ಬ ವ್ಯಕ್ತಿಯ ತೋಳು,ಸೊಂಟದಿಂದ ಕಾಲುಗಳ ಭಾಗ ಒಡೆದಿದೆ. ಹಸುವಿನ ಕೆಚ್ಚಲನ್ನು ಯತಿಯ ಬಲಗಡೆ ತಲೆ ಪಕ್ಕದಲ್ಲಿ ತೋರಿಸಿದ್ದು ಗಂಟೆಯ ಸರ ಕೊರಳಲ್ಲಿ ಕಟ್ಟಲಾಗಿದೆ. ಮತ್ತು ಚಿಕ್ಕ ಚೂಪಾದ ಕೋಡುಗಳಿದ್ದು, ಅವುಗಳ ಕೆಳಗೆ ಗೆಜ್ಜೆಯ ಸರವನ್ನು ಬಿಗಿಯಾಗಿ ಕಟ್ಟಲಾಗಿದೆ. ನಿಂತ ಹಸುವಿನ ಮುಂದಿನ ಮತ್ತು ಹಿಂದಿನ ಕಾಲುಗಳ ಮಧ್ಯೆ ಕುಳಿತ ಯತಿಯು ತಪವನ್ನಾಚರಿಸುವುದು ತಿಳಿಯುತ್ತದೆ. ಮತ್ತು ಹಸುವು ಯತಿವರ್ಯರಿಗೆ ಹಾಲು ಕರೆಯುತ್ತಿರು ವುದನ್ನು ಸಾಂಕೇತಿಕವಾಗಿ ತೋರಿಸಿದಂತೆ ಕಾಣುತ್ತದೆ.

**ಕಬ್ಬಿನಕೋಲು :** ಹಸುವಿನ ಬಾಲದಕಡೆ ನಿಂತ ಒಂದು ಕೋಲು ಮತ್ತು ಅದರ ನಾಲ್ಕೈದು ಉದ್ದವಾದ ಎಲೆಗಳು ಇವಲ್ಲದೆ ಆ ಕೋಲಿನಲ್ಲಿ ಚಿಕ್ಕ ಚಿಕ್ಕ ಗೆಣ್ಣು ಗಳನ್ನು ಪ್ರತ್ಯೇಕಿಸಿರುವುದರಿಂದ ಅದು ಒಂದು ಕಬ್ಬಿನ ಕೋಲೆಂದು ಮತ್ತು ಅದು ಕಬ್ಬಿನತೋಟವನ್ನು ಸಾಂಕೇ ತಿಕವಾಗಿ ಸೂಚಿಸಿದಂತೆ ಕಾಣುವುದು.

**ಇಬ್ಬರು ಭಕ್ತರು :** ಕಬ್ಬಿನಕೋಲಿನ ಬದಿಗೆ ನಿಂತ ಇಬ್ಬರು ಭಕ್ತರಿದ್ದು ಅವರು ಯತಿಯ ಕಡೆ ಮುಖ ಮಾಡಿರುವರು. ಅವರಲ್ಲಿ ಒಬ್ಬನ ಕೈಗಳನ್ನು ಮುಂದೆ ಚಾಚಿ ಬೊಗಸೆಯಲ್ಲಿ ಯಾವುದೋ ಒಂದು ವಸ್ತುವನ್ನು ಹಿಡಿದು ನಿಂತಿರುವನು. ಅವನು ತನ್ನ ತಲೆಯ ಉಂಗುರ ಕೂದಲನ್ನು ಹಿಂದಕ್ಕೆ ಎಳೆದು ಸಿಂಬೆಯಾಕಾರದಲ್ಲಿ ಅಲಂಕಾರ ಮಾಡಿಕೊಂಡು ಸುತ್ತಿ ತುರುಬನ್ನು ಬಿಗಿಯಾಗಿ ಕಟ್ಟಿರುವನು. ಕೈಗೆ ರುದ್ರಾಕ್ಷಿಹಾರ ಮತ್ತು ಸೊಂಟಕ್ಕೆ ವಸ್ತ್ರವನ್ನು ಬಿಗಿಯಾಗಿ ತನ್ನ ಮಂಡೆಯ ಮೇಲ್ಭಾಗದವರೆಗೆ ಸುತ್ತಿ ಕಟ್ಟಿಕೊಂಡಿರುವನು. ಅವನ ಹಿಂದೆ ಮತ್ತೊಬ್ಬನು ಮುಂದೆ ಚಾಚಿದ ಕೈಗಳಲ್ಲಿ ಒಂದು ದುಂಡುತಟ್ಟೆಯಿದೆ, ಅವನ ತಲೆಯ ಕೂದಲನ್ನು ಹಿಂದಕ್ಕೆ ಸ್ವಲ್ಪ ಕೆಳಗಿಳಿಸಿ ಸಣ್ಣ ತುರುಬನ್ನು ಕಟ್ಟಿದ್ದು ಓಲೆಗಳನ್ನು ಕಿವಿಗಳಲ್ಲಿ, ಸರವನ್ನು ಕೊರಳಲ್ಲಿ ಧರಿಸಿ ಸೊಂಟಕ್ಕೆ ವಸ್ತ್ರವನ್ನು ಬಿಗಿದಿರುವನು. ಸೊಂಟಕ್ಕೆ ಕಟ್ಟಿದ ವಸ್ತ್ರದ ನೆರಿಗೆ ಪಟ್ಟಿಯನ್ನು ಮುಂದೆ ಮಂಡೆಯ ಕೆಳಭಾಗದವರೆಗೆ ಇಳಿಬಿಟ್ಟಿರುವನು. ಕೈಗೆ ರುದ್ರಾಕ್ಷಿ ಹಾರವನ್ನು ಕಟ್ಟಲಾಗಿದೆ. ಈ ಇಬ್ಬರು ಭಕ್ತರು ನಿಂತ ಭಂಗಿಯು ಅತ್ಯಂತ ಭಕ್ತಿಯಿಂದ ಯತಿವರ್ಯನು ಎಡೆ ಯನ್ನು ಸ್ವೀಕರಿಸಲು ವಿನಂತಿ ಮಾಡಿಕೊಳ್ಳುವುದು ಕಾಣುತ್ತದೆ. ಇಬ್ಬರ ಎತ್ತರದಲ್ಲಿ ವ್ಯತ್ಯಾಸವಿದೆ.

**ದಂಪತಿ-ಸೇವಕರು :** ಹಸುವಿನ ಕೊರಳ ಹಗ್ಗ ವನ್ನು ಬಲಗೈಯಲ್ಲಿ ಹಿಡಿದು ನಿಂತ ವ್ಯಕ್ತಿಯಿದ್ದಾನೆ. ಅವನ ಹಿಂದೆ ಇಬ್ಬರು ದಂಪತಿಗಳಿದ್ದಾರೆ. ಹಸುವಿನ ಕೊರಳ ಹಗ್ಗ ಹಿಡಿದು ನಿಂತ ವ್ಯಕ್ತಿಯ ಎಡಗೈಯಲ್ಲಿ ಚಿಕ್ಕ ದಾದ ದಪ್ಪ ಕೋಲಿದೆ. ಬಹುಶಃ ಅದು ಮೋಳೆಯಿರ ಬಹುದು. ತುಂಬಿದ ಹುಡಿಯನ್ನು ಸೊಂಟಕ್ಕೆ ಕಟ್ಟಿರು ವನು. ತಲೆ ಚಪ್ಪಟೆಯಾಗಿದ್ದು ಕೂದಲನ್ನು ಬದಿಗೆ ಬಾಚಿರುವನು.. ಕೈಗಳಿಗೆ ರುದ್ರಾಕ್ಷಿಹಾರ ಕಟ್ಟಿರುವನು. ಬಿಗಿಯಾಗಿ ಸೊಂಟಕ್ಕೆ ಮಂಡೆಯ ಮೇಲ್ಭಾಗದವರೆಗೆ ವಸ್ತ್ರವನ್ನು ಸುತ್ತಿಕಟ್ಟಿರುವನು. ಎಡಗೈಯಲ್ಲಿ ಮೋಳೆ ಬಲಗೈಯಲ್ಲಿ ಹಸುವಿನ ಕೊರಳಹಗ್ಗ ಹಿಡಿದು ಸೊಂಟ ದಲ್ಲಿ ತುಂಬಿದ ಹುಡಿ ಕಟ್ಟಿಕೊಂಡು ಹೊತ್ತಿರುವ ಈ ವ್ಯಕ್ತಿಯು ಬದಿಯಲ್ಲಿಯ ದಂಪತಿಗಳ ಸೇವಕನಿರಬೇಕು.

ಅವನ ಬದಿಯಲ್ಲಿ ನಿಂತ ದಂಪತಿಗಳೂ ಯತಿ ವರ್ಯನ ಕಡೆ ಮುಖಮಾಡಿ ನಿಂತಿರುವರು.ಹೆಂಡತಿಯು

ತನ್ನ ತಲೆಯಮೇಲೆ ಕೊಡ ಹೊತ್ತು ಅದನ್ನು ಬಲಗೈಯಲ್ಲಿ ಹಿಡಿದಿರುವವಳು ಮತ್ತು ಆಕೆಯು ಎಡಗೈಯನ್ನೂ ಕೆಳಗೆ ಇಳಿಬಿಟ್ಟಿರುವಳು. ತಲೆಯ ಕೂದಲನ್ನು ಹಿಂದಕ್ಕೆ ಎಳೆದು ಸಿಂಬೆಯಂತೆ ಸುತ್ತಿ ತುರುಬನ್ನು ಕಟ್ಟಿರುವಳು. ಸೊಂಟಕ್ಕೆ ಬಿಗಿಯಾಗಿ ಸೀರೆಯನ್ನು ಕಾಲುಗಳ ಮೇಲಿನ ತನಕ ಸುತ್ತಿ ಉಟ್ಟಿರುವಳು. ಸೀರೆಯ ಸೆರಗಿನ ಅಲ್ಪ ಭಾಗವನ್ನು ಹಿಂಬದಿಯಲ್ಲಿ ಮಂಡೆಯ ತನಕ ತೋರಿಸಲಾಗಿದೆ. ಕೈಗಳಿಗೆ ರುದ್ರಾಕ್ಷಿಹಾರ ಕಟ್ಟಿರುವಳು. ಅವಳ ಹಿಂದೆ ಆಕೆಯ ಗಂಡನು ಕೈಮುಗಿದು ಭಕ್ತಿಯಿಂದ ನಿಂತಿರುವನು. ಇವನ ಎತ್ತರ ಹೆಂಡತಿ ಮತ್ತು ಅವರ ಸೇವಕನಿಗಿಂತ ಹೆಚ್ಚಿಗಿರುವುದು. ಸೊಂಟಕ್ಕೆ ಪಂಚೆಯನ್ನು ಕಟ್ಟಿರುವನು. ಪಂಚೆಯ ನೆರಿಗೆಯನ್ನು ಮುಂಬದಿಗೆ ಮಂಡೆಯ ಕೆಳಗಿನವರೆಗೆ ಇಳಿಬಿಟ್ಟುಕೊಂಡಿರುವನು. ಕೈಗಳಿಗೆ ರುದ್ರಾಕ್ಷಿಹಾರಗಳನ್ನು ಕಟ್ಟಿರುವನು.

ಈ ವಿವರಗಳಿಂದ ಯತಿಯು ಒಂದು ಕಬ್ಬಿನ ತೋಟದಲ್ಲಿ ತಪಸ್ಸಿಗೆ ಕುಳಿತಿರುವುದು, ಆ ಯತಿಗೆ ಹಸುವು ಹಾಲನ್ನು ಕರೆಯುವುದು, ಭಕ್ತಾದಿಗಳು ಎರಡು ಸನ್ನಿವೇಶದಲ್ಲಿ ಯತಿಯ ದರ್ಶನ ಎರಡು ಕಾರಣಕ್ಕಾಗಿ ಪಡೆದುದು ಗೋಚರಿಸುವುದು. ರುದ್ರಾಕ್ಷಿಹಾರವನ್ನು ಯತಿ ಮತ್ತು ಭಕ್ತಾದಿಗಳು ಕಟ್ಟಿಕೊಂಡಿರುವುದರಿಂದ ಅವರು ಶೈವರೆಂದು ತಿಳಿಯುವುದು. ಈ ಸನ್ನಿವೇಶವು ಪುರಾಣದಲ್ಲಿ ಕಾಣುವ ಒಬ್ಬ ಶೈವ ಮಹಿಮಾವಂತನ ಶಿಲ್ಪವೆಂದು ಊಹಿಸಬಹುದಾಗಿದೆ. ಹಾಗಾದರೆ ಆ ಮಹಿಮಾವಂತನು ಯಾರು ? ಶಿಲ್ಪದಲ್ಲಿ ಕಾಣುವ ಸನ್ನಿವೇಶಗಳು ಯಾವ ಯತಿಯ ಕಥೆಯಲ್ಲಿ ಕಾಣುವವು ? ಎಂಬ ಪ್ರಶ್ನೆಗಳು ಉದ್ಭವಿಸುತ್ತವೆ. ತಪಸ್ಸನ್ನಾಚರಿಸುವ ಯತಿಯ ಸುತ್ತ ಹುತ್ತ ಬೆಳೆಯುವುದು, ಹಸು ಯತಿಗೆ ಹಾಲುಹಿಂಡುವುದು ಇತ್ಯಾದಿ ವಿವಿಧ ಧರ್ಮದ ಪುರಾಣ, ಇತ್ಯಾದಿಗಳಲ್ಲಿ ಕಾಣುತ್ತವೆ. ಶಿಲ್ಪದಲ್ಲಿ ಕಾಣುವ ಸನ್ನಿವೇಶ ಮತ್ತು ಯತಿ-ಭಕ್ತವೃಂದ ಶೈವರಾಗಿರುವುದರಿಂದ ಈ ವಿವರಣೆಯನ್ನು ಶೈವ ಧರ್ಮದ ಕಥೆಗಳಲ್ಲಿ ನೋಡಬೇಕಾಗುತ್ತದೆ. ಅದು ಡಾ॥ ಆರ್.ಸಿ. ಹಿರೇಮಠ ಅವರು ಸಂಪಾದಿಸಿದ 'ಶ್ರೀ ಜಗದ್ಗುರು ತೋಂಟದ ಸಿದ್ಧಲಿಂಗ ಶಿವಯೋಗಿಗಳ ಷಟ್‌ಸ್ಥಲ ಜ್ಞಾನಸಾರಾಮೃತ'(ಧಾರವಾಡ, ೧೯೬೪)ದಲ್ಲಿದೆ. ಅದರಲ್ಲಿ ಮತ್ತು ಶಿಲ್ಪದಲ್ಲಿ ಕಾಣುವ ಒಂದೇ ಸನ್ನಿವೇಶದ ಸ್ಥೂಲ ವಿವರವನ್ನು ಈ ಕೆಳಗಿನ ವಿವರೆದಲ್ಲಿ ಕಾಣಬಹುದು.

ಮೇಲೆ ಪ್ರಸ್ತಾಪಿಸಿದ ಪುರಾಣದಲ್ಲಿ, ತೋಂಟದ ಶ್ರೀ ಸಿದ್ಧಲಿಂಗಯತಿಗಳು ದೇಶಸಂಚಾರ ಮಾಡುತ್ತಾ ಕೊನೆಗೆ ಮೈಸೂರುಮಠದ ಸಿದ್ಧಗಂಗಾಕ್ಷೇತ್ರಕ್ಕೆ ಬರುತ್ತಾರೆ. ಸಿದ್ಧಗಂಗಾದಿಂದ ಕಗ್ಗೆರೆಗೆ ಅಭಿಮುಖವಾಗಿರಲು ಆ ಊರ(ಗೊಲ್ಲರ) ನಂಬಣ್ಣನೆಂಬ ಭಕ್ತ, ಗಿರಿಗೌಡನೆಂಬ ಆ ಊರಗೌಡ ಮೊದಲಾದವರು ಸಿದ್ಧಲಿಂಗಯತಿಗಳನ್ನು ಕಗ್ಗೆರೆಗೆ ಕರೆದುಕೊಂಡು ಹೋಗುವ ಸಮಯದಲ್ಲಿ ಊರ ನೆರೆಯ ಉಪವನದಲ್ಲಿಯೇ ಒಂದು ಮಾಮರದ ಕೆಳಗೆ ಗದ್ದುಗೆಯನ್ನು ಹಾಕಿ ಅವರನ್ನು ಕುಳ್ಳಿರಿಸುವರು. ಅಷ್ಟರಲ್ಲಿ ಕೆಂಚ, ದೊಡ್ಡ ಎಂಬ ಶಬರರು ಕಗ್ಗೆರೆಯ ಮೇಲೆ ಭೀಕರ ದಾಳಿ ಮಾಡಿದರು. ವಾಲ್ಮೀಕಿ ಕುಲದರಸನಾದ ರತ್ನಗಿರಿಯ ದೊರೆಯು (ನಿರಂಜನ ವಂಶರತ್ನಾಕರ, ಪು. ೪೬),ಅಲ್ಲಿಯ ಜನ ಚದುರಿಹೋಗಿ ನಿಡುಗಲ್ಲದರಸರ ಸಹಾಯವನ್ನು ಪಡೆದರು. ನಂಬಣ್ಣ ಮೊದಲಾದವರ ಭಕ್ತಿಯ ಔತಣವನ್ನು ಸ್ವೀಕರಿಸಿದ ಸಿದ್ಧಲಿಂಗ ಶಿವಯೋಗಿಗಳು ಆ ಮಾಮರದಡಿಯಲ್ಲಿಯೇ ಶಿವಯೋಗ ನಿದ್ರಾಮುದ್ರಿತರಾದರು. ಹೀಗೆ ಆರು ತಿಂಗಳವರೆಗೆ ಶಿವಯೋಗಾನುಷ್ಠಾನದಲ್ಲಿರಲು ಅವರ ದೇಹದ ಸುತ್ತ ಹುತ್ತ ಬೆಳೆಯಿತು. ಆರುತಿಂಗಳು ಕಳೆದ ಮೇಲೆ ಕಗ್ಗೆರೆಯ ಗೌಡರು ಶಬರಾಧಿನಾಥನ ನಂಬುಗೆ ಪಡೆದು ಪುನಃ ಕಗ್ಗೆರೆಯನ್ನು ಕಟ್ಟಿಸಿ ನಂಬಣ್ಣ ಮೊದಲಾದ ಭಕ್ತರನ್ನು ಅಲ್ಲಿಗೆ ಕಳಿಸುವರು. ಭಕ್ತಜನರೆಲ್ಲರೂ ಅಲ್ಲಿಗೆ ಬಂದು ಹುತ್ತಿನಲ್ಲಿ ಕುಳಿತಿದ್ದ ಶಿವಯೋಗಿಗಳನ್ನು ಕಂಡು ಪ್ರಾರ್ಥಿಸುವರು. ಅವರ ಭಕ್ತಿಯನ್ನು ಸ್ವೀಕರಿಸಬೇಕೆಂದು ಶಿವಯೋಗಿಗಳು ಯೋಗದಿಂದ ಎಚ್ಚೆತ್ತು ಕಗ್ಗೆರೆಯನ್ನು ಪ್ರವೇಶಿಸುವರು.

ದಂತಕಥೆಯ ಪ್ರಕಾರ, ನಂಬಣ್ಣನ ಹಸುವು ಪ್ರತಿ ದಿನ ಯಥಾಪ್ರಕಾರ ಇನ್ನಿತರ ಹಸುಗಳ ಸಂಗಡ ಮೇಯ್ದು ಸಂಜೆ ಮನೆಗೆ ಬರುತ್ತಿತ್ತು. ಕೆಲವು ದಿವಸ ಅದು ಸಂಜೆಹೊತ್ತಿನಲ್ಲಿ ಹಾಲು ಕರೆಯಲಿಲ್ಲ. ಏಕೆ ಹಸುವು ಈ ರೀತಿ ಸಂಜೆ ಹಾಲು ಕರೆಯುತ್ತಿಲ್ಲ ? ಕಾರಣವೇನು ? ಇದನ್ನು ಪರೀಕ್ಷಿಸಬೇಕೆಂದು ಆತನು ಒಂದು ದಿನ ನಿರ್ಧರಿಸಿದ. ಹಸುಗಳು ಮನೆಗೆ ಮರಳಿ ಸಂಜೆ

ಹೊತ್ತಿಗೆ ಬರುವುದನ್ನು ಗೊಲ್ಲರ ನಂಬೆಣ್ಣ ಕಾಯು ಹತ್ತಿದ. ತನ್ನ ಹಸು ಇನ್ನಿತರ ಹಸುಗಳ ಸಂಗಡ ಬಾರ ದಿರುವುದನ್ನು ಅರಿತು ಅದನ್ನು ಹುಡುಕಲು ಹೋದ. ಅಂದು ಹಸುವು ಹುತ್ತದ ಮೇಲೆ ನಿಂತು ಹಾಲುಕರೆಯು ವುದನ್ನು ಕಂಡು ಚಕಿತನಾದ. ಹುತ್ತಿನಲ್ಲಿ ಶ್ರೀ ಸಿದ್ಧ ಲಿಂಗ ಯತಿಗಳು ಕುಳಿತಿದ್ದುದನ್ನು ತದನಂತರ ಮನ ಗಂಡು ಆಶ್ಚರ್ಯಭರಿತನಾದ. ಕಗ್ಗೆರೆಯಲ್ಲಿ ತೋಂಟದ ಸಿದ್ಧಲಿಂಗ ಶಿವಯೋಗಿಗಳು ಕಬ್ಬಿನತೋಟದಲ್ಲಿ ಬೀಡು ಬಿಟ್ಟು ತಪಸ್ಸನ್ನಾಚರಿಸಿದ ಸ್ಥಳವನ್ನು ಜನರು ಇಂದಿಗೂ ತೋರಿಸುತ್ತಾರೆ.

ಈ ಮೇಲಿನ ನಿರೂಪಣೆಯು ಶಿಲ್ಪದ ಚಿತ್ರಗಳಲ್ಲಿ ಕಾಣುವುದು. ಕೇಂದ್ರವ್ಯಕ್ತಿ—ಯತಿಯು—ಶ್ರೀ ಸಿದ್ಧ ಲಿಂಗ ಸ್ವಾಮಿಗಳು. ಹಸುವಿನ ಬಾಲದ ಬದಿಗೆ ಇಬ್ಬರು ನಿಂತ ವ್ಯಕ್ತಿಗಳ ಸಂದರ್ಭವು ಈ ಮೇಲೆ ತಿಳಿಸಿದ ಕಥೆ ಯಲ್ಲಿ ಕಾಣುವ ನಂಬೆಣ್ಣ ಮೊದಲಾದವರ ಭಕ್ತಿಯ ಔತಣವನ್ನು ಸ್ವೀಕರಿಸಿದ ಸಂದರ್ಭವಿರಬೇಕು. ಕಬ್ಬಿನಕೋಲು ಯತಿಯು ಕಬ್ಬಿನತೋಟದಲ್ಲಿ ತಪಸ್ಸನ್ನಾಚರಿಸಿದ ನಿರೂಪಣೆಯನ್ನು ನೀಡುವುದು. ಹಸುವಿನ ಕಾಲುಗಳ ಮಧ್ಯೆ ಯತಿಯು ತಪಸ್ಸ ನ್ನಾಚರಿಸುವುದು, ಹಸುವಿನ ಕೆಚ್ಚಲು ಬದಿಗೆ ತೋರಿಸಿರುವುದು, ಒಬ್ಬ ವ್ಯಕ್ತಿ ಹಸುವಿನ ಕೊರಳ ಹಗ್ಗ ಹಿಡಿದು ನಿಂತಿರುವುದು ಮತ್ತು ಬದಿಯಲ್ಲಿ ನಿಂತ ದಂಪತಿಗಳ ಸನ್ನಿವೇಶವು ಹಸುವಿನ ಪರೀಕ್ಷೆಗೈದ ಗೊಲ್ಲರ ನಂಬೆಣ್ಣನ ಸಂದರ್ಭ ತಿಳಿಸುವುದು. ಆದುದರಿಂದ ಈ ಶಿಲ್ಪವು ತೋಂಟದ ಶ್ರೀ ಸಿದ್ಧಲಿಂಗ ಶಿವಯೋಗಿಯ ದೆಂದು ಹೇಳಬಹುದು. ಈ ಚಿತ್ರವುಳ್ಳ ಪೀಠದ ಮೇಲೆ ಕುಳ್ಳಿರಿಸಿದ ಮೂರ್ತಿಯೂ ಶ್ರೀ ಸಿದ್ಧಲಿಂಗ ಯತಿಗಳ ದ್ದಾಗಿರಬೇಕು. ಅದು ಹೇಗಿದೆ, ಎಲ್ಲಿದೆ ಎಂಬ ಸಂಶಯ ಗಳು ತಲೆದೋರುತ್ತವೆ.

ಈ ಶಿಲ್ಪದ ಬದಿಗೆ ಒಂದು ಒಡೆದ ಬೃಹತ್ ನಂದಿಯ ವಿಗ್ರಹವಿದೆ. ಅದರ ಕೊರಳು ಮತ್ತು ಮುಂದಿನ ಕಾಲುಗಳ ಮುಂದೆ ಪದ್ಮಾಸನದಲ್ಲಿ ಕುಳಿತ ಒಬ್ಬ ಯತಿಯ ಶಿಲ್ಪವಿರುವುದು ವಿಶೇಷವಾಗಿದೆ (ಚಿತ್ರ-೨).ಇನ್ನೊಂದು ಶಿಲ್ಪಫಲಕದ ಮೇಲೆ ನಾಲ್ಕು ಮೂಲೆ ಗಳಲ್ಲಿ ನಾಲ್ಕು ಆಕಳು ಕಾಲುಗಳ ಮುದ್ರೆಗಳಿದ್ದು ಮಧ್ಯ ಚೌರಸಾಕಾರದ ತೊಟ್ಟಿಯಿರುವುದು ವಿಶೇಷವಾಗಿದೆ. (ಚಿತ್ರ-೩).ಇದಲ್ಲದೆ ಬದಿಯ ಶ್ರೀ ಸಂಗಮೇಶ್ವರ ದೇವಾ ಲಯದ ಒಳಗಡೆ ವಿವಿಧ ನಮೂನೆಯ ಶಿವಲಿಂಗಗಳು, ನಿಂತ ಮತ್ತು ಕುಳಿತ ಭೈರವ ವಿಗ್ರಹಗಳು, ದೇವಿ ಮೂರ್ತಿಗಳಲ್ಲದೆ ಹಲವಾರು ನಮೂನೆಯ ಯೋಗಿನಿ ಗಳು ಮತ್ತು ಯೋಗಿಗಳು—ಒಂದರಲ್ಲಿ ಮೂರು, ಮತ್ತೊಂದರಲ್ಲಿ ಎಂಟು, ಇನ್ನೊಂದರಲ್ಲಿ ಒಂದು, ಉಪಾ ಸಕ–ಭಕ್ತರ ಶಿಲ್ಪ ಇತ್ಯಾದಿ ದುಂಡು ಮತ್ತು ಉಬ್ಬು ಶಿಲ್ಪಗಳಲ್ಲಿವೆ.ಒಂದೇಸಾಲಿನಲ್ಲಿ ರುದ್ರಾಕ್ಷಿಸರ ಅಲಂಕಾರದ ಮೂವತ್ತಾರು ಲಿಂಗಗಳು ಒಂದೆಡೆ, ಉಳಿದವುಗಳಲ್ಲಿ ಒಂದಕ್ಕೆ ನಾಲ್ಕುನೂರ ಇಪ್ಪತ್ತೊಂಭತ್ತು ಚಿಕ್ಕ ಚಿಕ್ಕ ಲಿಂಗಗಳನ್ನು ರೇಖೆಯಲ್ಲಿ ತೋರಿಸಲಾಗಿದೆ. ಇಂತಹ ಶೈವ ದೇವಸ್ಥಾನದಲ್ಲಿ ಭೈರವ ಮತ್ತು ದೇವಿಮೂರ್ತಿಗಳ ಸಂಗಡ ಶೈವ ಉಪಾಸಕ, ಯೋಗಿ, ಯೋಗಿನಿ, ಭಕ್ತ, ಇತ್ಯಾದಿ ಶಿಲ್ಪಗಳು ಹೆಚ್ಚಿನ ಸಂಖ್ಯೆಯಲ್ಲಿ ಕಂಡುಬಂದಿ ರುವುದರಿಂದ ಅದೊಂದು ಶೈವ–ಶಾಕ್ತ ಸಂಪ್ರದಾಯ ಗಳ ಕೇಂದ್ರವೆಂದೂ ಹಲವಾರುಗಳು ವಿಜಯನಗರ ಕಾಲ ದವೆಂದೂ ಡಾ॥ ಅ. ಸುಂದರ ಅವರು ಅಭಿಪ್ರಾಯ ಪಟ್ಟಿರುವರು.

ಈ ಮೂರ್ತಿಗಳಲ್ಲಿ ಒಬ್ಬ ಯೋಗಿಯ (ಒಡೆದ) ದುಂಡುವಿಗ್ರಹಕ್ಕೆ ಗಡ್ಡ, ಮೀಸೆ, ಇತ್ಯಾದಿಗಳಿದ್ದು ಲಂಗೋಟಿಯನ್ನು ತೊಡಿಸಲಾಗಿದೆ. ಆ ವಿಗ್ರಹ ದರ್ಶನವು ಭಯಭಕ್ತಿಯನ್ನುಂಟು ಮಾಡುವ ಹಾಗಿದೆ ಎಂದು ಡಾ॥ ಸುಂದರ ಅವರು ಅಭಿಪ್ರಾಯಪಟ್ಟಿರು ವರು. ಬಹುಶ: ಈ ವಿಗ್ರಹವೇ ಸಿದ್ಧಲಿಂಗಮೂರ್ತಿ ಯಿರಬಹುದು. ಅವುಗಳಲ್ಲಿ ಒಂದು ದಂಪತಿಗಳ ಕೈಯಲ್ಲಿ ಇಷ್ಟಲಿಂಗ ಹಿಡಿದ ಶಿಲ್ಪವಿದೆ. ಇನ್ನೊಂದಕ್ಕೆ ಅಪರೂಪವಾಗಿ ಕೃಷ್ಣನ ಮೂರ್ತಿಯ ಕಿರೀಟದಲ್ಲಿ ಸಣ್ಣ ಲಿಂಗವನ್ನು ತೋರಿಸಲಾಗಿದೆ. ಇದರಿಂದ ಡಾ॥ ಸುಂದರ ಅವರು ಈ ಪ್ರದೇಶದಲ್ಲಿ ಶ್ರೀವೈಷ್ಣವಧರ್ಮಕ್ಕೆ ಶೈವ ಧರ್ಮದ ಪ್ರಭಾವದ ಸಂಕೇತವಿರಬಹುದೆಂದಿದ್ದಾರೆ. ಈ ವಿಷಯದಿಂದ ವೀರಶೈವಧರ್ಮದ ಪ್ರಭಾವವು ವೈಷ್ಣವ ಧರ್ಮದ ಮೇಲೆ ಬಿದ್ದಿರಬೇಕು ಮತ್ತು ಅದು ಈ ಎರಡು ಪಂಗಡಗಳನ್ನು ಸಮಾಧಾನ ಪಡಿಸುವ ಒಂದು ಪ್ರಯೋಗವಾಗಿರಬೇಕು.

ತೋಂಟದ ಶ್ರೀ ಸಿದ್ಧಲಿಂಗೇಶ್ವರ ಶಿಲ್ಪವು

ಶೈಲಿಯ ದೃಷ್ಟಿಯಿಂದ ಕ್ರಿ. ಶ. ಸು. ೧೩-೧೪ನೆಯ ಶತಮಾನದ್ದು. ಸಾಹಿತ್ಯದ ಪ್ರಕಾರ, ವಿದ್ವಾಂಸರು, ತೋಂಟದ ಸಿದ್ಧಲಿಂಗಸ್ವಾಮಿಗಳ ಕಾಲಮಾನ ಕ್ರಿ. ಶ. ಸು. ೧೫ನೆಯ ಶತಮಾನದ್ದೆಂದು ಅಭಿಪ್ರಾಯಪಟ್ಟಿದ್ದಾರೆ. ಇದಕ್ಕೆ ಚೆನ್ನಬಸವಪುರಾಣ (೭೩, ೪೩, ೭೪), ಪ್ರೌಢದೇವರಾಯನ ಆಳ್ವಿಕೆಯ ಕಾಲ (ಕ್ರಿ. ಶ. ಸು. ೧೪೨೯_೪೯) ಮೊದಲಾದವುಗಳ ವಿವರವನ್ನು ನೀಡುವರು. ಡಾ॥ ಸುಂದರ ಅವರು ವಿಜಯನಗರದ ಕೆಲ ಅರಸರಲ್ಲಿ ವೀರಶೈವಧರ್ಮದ ಬೆಳವಣಿಗೆಗೆ ನೆರವಾದವರ ಮತ್ತು ಅವರು ನೀಡಿದ ಸಹಕಾರದ ಬಗೆಗೂ ಸೂಚಿಸಿರುವರು. ಆದರೆ ಈ ಭಾಗವು ವಿಜಯನಗರ ಅರಸರ ಆಳ್ವಿಕೆಯ ವ್ಯಾಪ್ತಿಯಲ್ಲಿ ಇದ್ದಿತ್ತೇ ? ಮತ್ತು ಹಿಂದೂ ಧರ್ಮದ ಬೆಳವಣಿಗೆಗೆ ಪುರಸ್ಕಾರ ದೊರೆತಿತ್ತೇ ? ಎಂಬುದನ್ನು ವಿಚಾರ ಮಾಡಬೇಕಾಗುತ್ತದೆ. (ನೋಡಿ: ಪಿ.ಬಿ. ದೇಸಾಯಿ : ಎ ಹಿಸ್ಟರಿ ಆಫ್ ಕರ್ನಾಟಕ, ಧಾರವಾಡ, ೧೯೭೦). ಸಮಂಜಸ ಆಧಾರಗಳು ದೊರೆಯುವವರೆಗೆ ಇದೊಂದು ಅಭಿಪ್ರಾಯವಾಗಿ ಉಳಿಯುವುದು.*

* ಕೃತಜ್ಞತೆಗಳು : ಅನ್ವೇಷಣೆಯ ಕಾರ್ಯ ಕೈಕೊಳ್ಳಲು ಪರವಾನಿಗೆ ನೀಡಿದವರು ಕರ್ನಾಟಕ ವಿಶ್ವವಿದ್ಯಾಲಯದ ಡಾ॥ ಜಿ. ಕೆ. ನಾರಾಯಣರೆಡ್ಡಿ, ಕುಲಪತಿಗಳು ಮತ್ತು ಡಾ॥ ವಿ.ವಿ. ಬಡಿಗೇರ, ಕುಲಸಚಿವರು. ನನ್ನ ಅಧ್ಯಯನದಲ್ಲಿ ಸಹಕರಿಸಿದವರು. ಬಸರಕೋಡ ಗ್ರಾಮದ ಮಂಡಳ ಪಂಚಾಯತಿ ಅಧ್ಯಕ್ಷರು ಮತ್ತು ಸಾರ್ವಜನಿಕರು. ಡಾ॥ ಸಾಲಿಮಠ, ಶ್ರೀ ಅಡಿಕೆಣ್ಣನವರ ಮತ್ತು ಶ್ರೀ ಹೊಸಮನಿ (ಸಿಂದಗಿ) ಅವರುಗಳು ಚಾನುಕೋಟೆಗೆ ಹೋಗುವಲ್ಲಿ ಸಹಕಾರ ನೀಡಿರುವರು. ಶ್ರೀ ಅಡಿಕೆಣ್ಣನವರು ಚಾನುಕೋಟಿಯ ದೇವಾಲಯ ಮತ್ತು ಶಾಸನಗಳನ್ನು ಅಭ್ಯಾಸ ಮಾಡಿ ವರದಿ ನೀಡಲು ಮೊದಲು ವಿನಂತಿಸಿದ್ದರು. ಅದೇ ರೀತಿ ಶ್ರೀ ಶರಣಪ್ಪ ಕಂಚಾಣಿಯವರು ಸರೂರಿನಲ್ಲಿ ದೊರೆತ ಹೊಸ ಶಾಸನವನ್ನು ಅಧ್ಯಯನ ಕೈಗೊಳ್ಳಲು ಡಾ॥ ಎಂ. ಎಂ. ಕಲ್ಬುರ್ಗಿಯವರಿಗೆ ಮೊದಲು ವಿನಂತಿಸಿದ್ದರು.ಡಾ॥ ಕಲ್ಬುರ್ಗಿಯವರು ಈ ಕಾರ್ಯ ಕೈಕೊಳ್ಳಲು ನಂತರ ಸೂಚಿಸಿದ್ದರು. ಇವರೆಲ್ಲರಿಗೂ ನಾನು ಧನ್ಯವಾದಗಳನ್ನು ಸಲ್ಲಿಸುತ್ತೇನೆ.